

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 247 |
| ಉತ್ತರಿಸಬೇಕಾದ ದಿನಾಂಕ | 09.12.2020 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ಪ್ರತಿಯೊಬ್ಬರಿಗೂ "ಸೂರು" ಎಂಬ ಕಾರ್ಯಕ್ರಮವು ಸರ್ಕಾರದ ಮಟ್ಟದಲ್ಲಿ ಜರೂರಾಗಿ ನಡೆಯುತ್ತಿದೆಯೇ; | ಹೌದು.<br><br>ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿ ಆವಾಸ್ ಯೋಜನೆಯ "ಸರ್ವರಿಗೂ ಸೂರು - 2022" (Housing For All - 2022) ಅಭಿಯಾನದಡಿ ಈ ರಾಜ್ಯದಲ್ಲಿಯೂ ವಸತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| ಆ | ಬಡವರಿಗೆ ಸೂರು ಒದಗಿಸುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡಿರುವ ಕಾರ್ಯಕ್ರಮಗಳಾವುವು; ಈ ಕಾರ್ಯಕ್ರಮಗಳನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು; | ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದ ಮೂಲಕ ರಾಜ್ಯದಲ್ಲಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಎಲ್ಲಾ ಬಡತನ ರೇಖೆಗಿಂತ ಕೆಳಗಿರುವ ವಸತಿರಹಿತ ಕುಟುಂಬಗಳಿಗೆ ವಸತಿ ಸೌಕರ್ಯವನ್ನು ಒದಗಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ:-<br><br>**ವಸತಿ ಯೋಜನೆಗಳು:**<br><br>1. ಬಸವ ವಸತಿ ಯೋಜನೆ<br>2. ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಹಾಗೂ ನಗರ)<br>3. ದೇವರಾಜ ಅರಸು ಯೋಜನೆ (ಗ್ರಾಮೀಣ ಹಾಗೂ ನಗರ)<br>4. ವಾಜಪೇಯಿ ನಗರ ವಸತಿ ಯೋಜನೆ<br>5. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) (ಕೇಂದ್ರ ಸರ್ಕಾರ ಪುರಸ್ಕೃತ)<br>6. ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) (ಕೇಂದ್ರ ಸರ್ಕಾರ ಪುರಸ್ಕೃತ)<br>7. "ಮುಖ್ಯ ಮಂತ್ರಿಗಳ ಒಂದು ಲಕ್ಷ ಬೆಂಗಳೂರು ಬಹುಮಹಡಿ ವಸತಿ ಯೋಜನೆ".<br><br>**ನಿವೇಶನ ಯೋಜನೆಗಳು:**<br><br>1. ಇಂದಿರಾ ಗ್ರಾಮೀಣ ವಸತಿ ನಿವೇಶನ ಯೋಜನೆ<br>2. ವಾಜಪೇಯಿ ನಗರ ನಿವೇಶನ ಯೋಜನೆ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) (ಕೇಂದ್ರ ಸರ್ಕಾರ ಪುರಸ್ಕೃತ) ಮತ್ತು ಮುಖ್ಯಮಂತ್ರಿಗಳ ಒಂದು ಲಕ್ಷ ಬೆಂಗಳೂರು ಬಹುಮಹಡಿ ಯೋಜನೆಯನ್ನು ಹೊರತುಪಡಿಸಿ, ಉಳಿದ ಯೋಜನೆಗಳಡಿ ಸರ್ಕಾರದ ಮಾರ್ಗಸೂಚಿಗಳನ್ವಯ ನಿಗಮದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು |

| | | |
|---|---|---|
| | | ಪೂರ್ಣಗೊಳಿಸಬೇಕಾಗಿರುತ್ತದೆ. ಆದರೆ, ಫಲಾನುಭವಿಗಳೇ ಮನೆಗಳನ್ನು ಸ್ವತಃ ನಿರ್ಮಿಸಿಕೊಳ್ಳುತ್ತಿದ್ದು, ನಿಗದಿಪಡಿಸಿದ ಕಾಲಮಿತಿಯೊಳಗಾಗಿ ಮನೆಗಳನ್ನು ಪೂರ್ಣಗೊಳಿಸುವಂತೆ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮುಖಾಂತರ ಹಿಂಬಾಲಿಕಾ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ | ಇದುವರೆವಿಗೂ ರಾಜ್ಯದಲ್ಲಿ ಗುರುತಿಸಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; ಅದರಲ್ಲಿ ಎಷ್ಟು ಫಲಾನುಭವಿಗಳಿಗೆ ವಸತಿ ಹಂಚಿಕೆ ಮಾಡಲಾಗಿದೆ; | 2018 ರಲ್ಲಿ ರಾಜ್ಯಾದ್ಯಂತ ಗ್ರಾಮೀಣ ಪ್ರದೇಶದಲ್ಲಿ ವಸತಿರಹಿತರ ಸಮೀಕ್ಷೆ ಮಾಡಲಾಗಿದ್ದು, ಆ ಸಮೀಕ್ಷೆ ವರದಿ ಪ್ರಕಾರ ಒಟ್ಟು 18,69,858 ವಸತಿರಹಿತರು ಕಂಡು ಬಂದಿರುತ್ತಾರೆ. 2018 ರಿಂದ ಇಲ್ಲಿಯವರೆಗೆ ಒಟ್ಟು 41,711 ಫಲಾನುಭವಿಗಳನ್ನು ಆಯ್ಕೆ ಮಾಡಲಾಗಿರುತ್ತದೆ. ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br><br>ನಗರ ಪ್ರದೇಶದಲ್ಲಿ 2015-16 ರಿಂದ 2017-18 ರವರೆಗೆ ರಾಜ್ಯಾದ್ಯಂತ ನಡೆಸಿದ ಬೇಡಿಕೆ ಸಮೀಕ್ಷೆ ಪ್ರಕಾರ ಒಟ್ಟು 3,19,304 ವಸತಿರಹಿತರು ಕಂಡು ಬಂದಿರುತ್ತಾರೆ. ಈ ಪೈಕಿ ಪ್ರಧಾನ ಮಂತ್ರಿ ಆವಾಸ್ ಯೋಜನೆಯ ಬಿ.ಎಲ್.ಸಿ. ಘಟಕದಡಿ ಇಲ್ಲಿಯವರೆಗೆ ಒಟ್ಟು 2,36,314 ಫಲಾನುಭವಿಗಳಿಗೆ ವಸತಿ ಸೌಲಭ್ಯ ಒದಗಿಸಲು ಕೇಂದ್ರ ಸರ್ಕಾರದಿಂದ ಅನುಮೋದನೆ ಪಡೆಯಲಾಗಿದೆ. |
| ಈ | ವಸತಿ ಇಲಾಖೆಯಡಿ ಹಂಚಿಕೆ ಮಾಡುವ ನಿವೇಶನಗಳಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗಿದೆಯೇ; ಹಾಗಿದ್ದಲ್ಲಿ, ನಿವೇಶನಕ್ಕಾಗಿ ಗುರುತಿಸಿರುವ ಒಟ್ಟು ಜಮೀನು ಎಷ್ಟು? (ಜಿಲ್ಲಾವಾರು ವಿವರ ನೀಡುವುದು) | ವಸತಿ ಇಲಾಖೆಯಡಿ ಹಂಚಿಕೆ ಮಾಡುವ ನಿವೇಶನಗಳಿಗೆ ಅಗತ್ಯ ಮೂಲಭೂತ ಸೌಕರ್ಯ ಕಲ್ಪಿಸುವುದು ಆಯಾ ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಯಾಗಿರುತ್ತದೆ.<br><br>2013-14ನೇ ಸಾಲಿನ ನಂತರದ ಬಡಾವಣೆಗಳಲ್ಲಿ ಗುಂಪು ಮನೆಗಳ ನಿರ್ಮಾಣದಲ್ಲಿ ಶೇಕಡಾ 50 ರಷ್ಟು ಭೌತಿಕ ಪ್ರಗತಿ ಸಾಧಿಸಿದ್ದಲ್ಲಿ, ಜಿಲ್ಲಾಡಳಿತದಿಂದ ಬರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ಅಗತ್ಯ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗುತ್ತಿದೆ.<br><br>ಅರ್ಹ ನಿವೇಶನರಹಿತರಿಗೆ ನಿವೇಶನ ಹಂಚಿಕೆ ಮಾಡಲು ಸರ್ಕಾರಿ ಜಮೀನಿಗೆ ಪ್ರಥಮ ಆದ್ಯತೆ ನೀಡಲಾಗಿದ್ದು, ಸರ್ಕಾರಿ ಜಮೀನು ಲಭ್ಯವಿಲ್ಲದ ಕಡೆಗಳಲ್ಲಿ ವಸತಿಗೆ ಸೂಕ್ತ ಖಾಸಗಿ ಜಮೀನನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಜಮೀನು ಖರೀದಿ ಸಮಿತಿ ಮೂಲಕ ಖರೀದಿಸಿ, ನಿವೇಶನ ಹಂಚಿಕೆ ಮಾಡಲು ಅವಕಾಶ ಕಲ್ಪಿಸಲಾಗಿದೆ. ರಾಜ್ಯಾದ್ಯಂತ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ನಿವೇಶನ ಹಂಚಿಕೆ ಮಾಡಲು ಪ್ರಸ್ತುತ 6169.76 ಎಕರೆ ಜಮೀನು ಲಭ್ಯವಿದ್ದು, 3632.26 ಎಕರೆ ಜಮೀನನ್ನು (ಸರ್ಕಾರಿ ಮತ್ತು ಖಾಸಗಿ ಜಮೀನು ಒಳಗೊಂಡಂತೆ) ಗುರುತಿಸಲಾಗಿದೆ.<br><br>ಈ ಬಗ್ಗೆ ಜಿಲ್ಲಾವಾರು ಲಭ್ಯವಿರುವ ಹಾಗೂ ಗುರ್ತಿಸಿರುವ ಜಮೀನುಗಳ ವಿವರಗಳನ್ನು ಅನುಬಂಧ–01 ರಲ್ಲಿ ಒದಗಿಸಿದೆ. |

[ಸಂಖ್ಯೆ: ವಇ 175 ಹೆಚ್‌ಎಫ್‌ಎ 2020]

(ವಿ. ಸೋಮಣ್ಣ)
ವಸತಿ ಸಚಿವರು.

ಅನುಬಂಧ - 01

# LCQ - 247

| ಕ್ರ ಸಂ | ಜಿಲ್ಲೆ | ಗ್ರಾಮೀಣ | | | ನಗರ | | |
|---|---|---|---|---|---|---|---|
| | | ಲಭ್ಯವಿರುವ ಭೂಮಿ (ಎಕರೆ ಮತ್ತು ಸೆಂಟ್ಸ್‌ಗಳಲ್ಲಿ) | ಗುರುತಿಸಲಾದ ಭೂಮಿ (ಎಕರೆ ಮತ್ತು ಸೆಂಟ್ಸ್‌ಗಳಲ್ಲಿ) | ಒಟ್ಟು | ಲಭ್ಯವಿರುವ ಭೂಮಿ (ಎಕರೆ ಮತ್ತು ಸೆಂಟ್ಸ್‌ಗಳಲ್ಲಿ) | ಗುರುತಿಸಲಾದ ಭೂಮಿ (ಎಕರೆ ಮತ್ತು ಸೆಂಟ್ಸ್‌ಗಳಲ್ಲಿ) | ಒಟ್ಟು |
| 1 | ಬಾಗಲಕೋಟೆ | 43.68 | 0.00 | 43.68 | 73.05 | 31.30 | 104.35 |
| 2 | ಬಳ್ಳಾರಿ | 61.05 | 7.05 | 68.10 | 405.66 | 68.43 | 474.09 |
| 3 | ಬೆಳಗಾವಿ | 15.00 | 0.00 | 15.00 | 147.63 | 32.03 | 179.65 |
| 4 | ಬೆಂಗಳೂರು ಗ್ರಾಮಾಂತರ | 108.45 | 211.41 | 319.86 | 32.00 | 0.00 | 32.00 |
| 5 | ಬೆಂಗಳೂರು ನಗರ | 8.80 | 0.00 | 8.80 | 0.00 | 0.00 | 0.00 |
| 6 | ಬೀದರ | 96.29 | 17.50 | 113.79 | 79.59 | 18.58 | 98.17 |
| 7 | ಚಾಮರಾಜನಗರ | 35.94 | 17.83 | 53.76 | 32.39 | 30.00 | 62.39 |
| 8 | ಚಿಕ್ಕಬಳ್ಳಾಪುರ | 442.04 | 0.00 | 442.04 | 142.28 | 0.00 | 142.28 |
| 9 | ಚಿಕ್ಕಮಗಳೂರು | 179.94 | 15.00 | 194.94 | 47.98 | 0.00 | 47.98 |
| 10 | ಚಿತ್ರದುರ್ಗ | 147.68 | 498.97 | 646.65 | 126.06 | 51.15 | 177.21 |
| 11 | ದಕ್ಷಿಣ ಕನ್ನಡ | 138.45 | 26.97 | 165.42 | 61.73 | 1.42 | 63.15 |
| 12 | ದಾವಣಗೆರೆ | 26.40 | 0.00 | 26.40 | 56.28 | 110.22 | 166.50 |
| 13 | ಧಾರವಾಡ | 46.74 | 49.17 | 95.91 | 127.51 | 134.12 | 261.63 |
| 14 | ಗದಗ | 87.97 | 80.25 | 168.22 | 306.16 | 0.00 | 306.16 |
| 15 | ಹಾಸನ | 199.93 | 96.44 | 296.37 | 43.49 | 19.58 | 63.07 |
| 16 | ಹಾವೇರಿ | 283.69 | 8.20 | 291.88 | 114.84 | 0.00 | 114.84 |
| 17 | ಕಲಬುರಗಿ | 16.07 | 4.00 | 20.07 | 88.18 | 288.15 | 376.33 |
| 18 | ಕೊಡಗು | 62.10 | 0.00 | 62.10 | 8.06 | 0.00 | 8.06 |
| 19 | ಕೋಲಾರ | 93.67 | 11.00 | 104.67 | 67.06 | 0.00 | 67.06 |
| 20 | ಕೊಪ್ಪಳ | 71.46 | 8.80 | 80.26 | 107.46 | 16.90 | 124.36 |
| 21 | ಮಂಡ್ಯ | 221.76 | 434.62 | 656.37 | 36.18 | 0.00 | 36.18 |
| 22 | ಮೈಸೂರು | 75.92 | 4.00 | 79.92 | 255.48 | 777.88 | 1033.36 |
| 23 | ರಾಯಚೂರು | 17.36 | 5.00 | 22.36 | 133.27 | 190.20 | 323.47 |

# LCQ - 247

| ಕ್ರ ಸಂ | ಜಿಲ್ಲೆ | ಗ್ರಾಮೀಣ | | | ನಗರ | | |
|---|---|---|---|---|---|---|---|
| | | ಲಭ್ಯವಿರುವ ಭೂಮಿ (ಎಕರೆ ಮತ್ತು ಸೆಂಟ್ಸ್‌ನಲ್ಲಿ) | ಗುರುತಿಸಲಾದ ಭೂಮಿ (ಎಕರೆ ಮತ್ತು ಸೆಂಟ್ಸ್‌ನಲ್ಲಿ) | ಒಟ್ಟು | ಲಭ್ಯವಿರುವ ಭೂಮಿ (ಎಕರೆ ಮತ್ತು ಸೆಂಟ್ಸ್‌ನಲ್ಲಿ) | ಗುರುತಿಸಲಾದ ಭೂಮಿ (ಎಕರೆ ಮತ್ತು ಸೆಂಟ್ಸ್‌ನಲ್ಲಿ) | ಒಟ್ಟು |
| 24 | ರಾಮನಗರ | 67.96 | 19.20 | 87.16 | 144.81 | 0.00 | 144.81 |
| 25 | ಶಿವಮೊಗ್ಗ | 106.78 | 190.68 | 297.46 | 176.25 | 0.00 | 176.25 |
| 26 | ತುಮಕೂರು | 157.86 | 23.08 | 180.94 | 209.01 | 0.00 | 209.01 |
| 27 | ಉಡುಪಿ | 53.87 | 16.31 | 70.18 | 15.00 | 0.00 | 15.00 |
| 28 | ಉತ್ತರ ಕನ್ನಡ | 9.13 | 3.75 | 12.88 | 25.00 | 3.33 | 28.33 |
| 29 | ವಿಜಯಪುರ | 24.95 | 9.08 | 34.03 | 172.08 | 88.49 | 260.56 |
| 30 | ಯಾದಗಿರಿ | 10.83 | 12.20 | 23.03 | 23.58 | 0.00 | 23.58 |
| | ಒಟ್ಟು | **2911.71** | **1770.49** | **4682.20** | **3258.05** | **1861.77** | **5119.81** |